

# ಕರ್ನಾಟಕ ವಿಧಾನ ಪರಿಷತ್ತು

## ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

## ಚುಕ್ಕೆ ರಹಿತ ಪ್ರಶ್ನೆ

ದಿನಾಂಕ : 12-03-2021 ಪ್ರಶ್ನೆ ಸಂಖ್ಯೆ : 918 (941)

ಸದಸ್ಯರ ಹೆಸರು ಮತ್ತು ಕ್ಷೇತ್ರ : ಶ್ರೀ ಸುನೀಲ್ ಗೌಡ ಬಸನಗೌಡ ಪಾಟೀಲ್ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ)

ಉತ್ತರ ನೀಡಬೇಕಾದ ದಿನಾಂಕ : 12-03-2021

ಉತ್ತರಿಸುವ ಸಚಿವರು : ಮೂಲಸೌಲಭ್ಯ ಅಭಿವೃದ್ಧಿ ಹಾಗೂ ಹಜ್ ಮತ್ತು ವಕ್ಫ್ ಸಚಿವರು

ವಿಷಯ : ವಿಜಯಪುರ ವಿಮಾನ ನಿಲ್ದಾಣದ ಪ್ರಗತಿಯ ಕುರಿತು

(ಅ) ವಿಜಯಪುರ ಜಿಲ್ಲೆಯಲ್ಲಿ ನಿರ್ಮಾಣವಾಗುತ್ತಿರುವ ವಿಮಾನ ನಿಲ್ದಾಣ ಕಾಮಗಾರಿಯ ಬಗ್ಗೆ ಸರ್ಕಾರ ನಿರ್ಲಕ್ಷ್ಯ ತಾಳಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ;

(ಆ) ಸದರಿ ಕಾಮಗಾರಿಗೆ ಅನುದಾನದ ಕೊರತೆ ಏನಾದರೂ ಇದೆಯೇ;

(ಇ) ಸದರಿ ಕಾಮಗಾರಿಗೆ ಅನುದಾನದ ಕೊರತೆ ಇಲ್ಲದಿದ್ದಲ್ಲಿ, ಕಾಮಗಾರಿಯನ್ನು ಏಕೆ ಶೀಘ್ರವಾಗಿ ಪ್ರಾರಂಭಿಸುತ್ತಿಲ್ಲ ; ಪ್ರಾರಂಭಿಸದಿರಲು ಕಾರಣವೇನು ;

(ಈ) ಸದರಿ ಕಾಮಗಾರಿಯ ಪ್ರಗತಿಯಲ್ಲಿ ಇರುವ ಅಡೆತಡೆಗಳು ಯಾವುವು ; ಈ ಅಡೆತಡೆಗಳನ್ನು ನಿವಾರಿಸಲು ಸರ್ಕಾರ ಕೈಗೊಂಡ ಕ್ರಮಗಳೇನು ;

(ಉ) ಶಿವಮೊಗ್ಗ ಜಿಲ್ಲೆಯಲ್ಲಿ ನಿರ್ಮಾಣವಾಗುತ್ತಿರುವ ವಿಮಾನ ನಿಲ್ದಾಣಕ್ಕೆ ಹೆಚ್ಚಿನ ಅನುದಾನ ನೀಡಿ, ವಿಜಯಪುರ ವಿಮಾನ ನಿಲ್ದಾಣಕ್ಕೆ ಕಡಿಮೆ ಅನುದಾನ ನೀಡಿರುವುದೇಕೆ ;

(ಊ) ಈ ರೀತಿ ತಾರತಮ್ಯ ನಿಯಮವನ್ನು ಏಕೆ ಅನುಸರಿಸಲಾಗುತ್ತಿದೆ;

(ಋ) ಪ್ರಸ್ತುತ ಕಾಮಗಾರಿಯನ್ನು ಪ್ರಾರಂಭಿಸಲಾಗಿದೆಯೇ ; ಹಾಗಿದ್ದಲಿ,ೆಲ ಎಷ್ಟು ಪ್ರಮಾಣದ ಕಾಮಗಾರಿ ಪೂರ್ಣ ಆಗಿದೆ ; (ಸಂಪೂರ್ಣ ವಿವರ ನೀಡುವುದು)

(ಎ) ಪ್ರಾರಂಭವಾಗದಿದ್ದಲ್ಲಿ, ಕಾರಣವೇನು ? (ವಿವರ ನೀಡುವುದು)